# ಹೂ ಗೊಂಚಲು



ಪಾಂಡ್ಯೇಶ್ವರ ಗಣಪತಿರಾವ್

1928



 [ಬೆಲೆ ೪ ಆಣೆ

# ವಿಷಯಸೂಚಿಕೆ.

# ಒಂದು ಮಾತು

ಪೂರ್ವಕವಿಗಳು ಅನುಸರಿಸುತಿದ್ದ ಛಂದಸ್ಸುಗಳೆಲ್ಲ ಸರ್ವತ್ರಪ್ರಚಾರವಾಗಿವೆ; ಹೊಸ ಕವಿಗಳ ಹೊಸ ಹಾದಿಗಳಲ್ಲಿ ನಡೆವವರು ಸಾಕಷ್ಟು ಮಂದಿ ಇನ್ನೂ ಬಂದಿಲ್ಲ; ಎಂದಮಾತ್ರಕ್ಕೆ, 'ವಿನೂತನಕವಿತೆ' ಎಂದವನ್ನು ಬೀಳಗೊಡುವುದು ಸಾಹಿತ್ಯದ ಬೆಳವಣಿಗೆಗೆ ಕುಂದನ್ನುಂಟು ಮಾಡದಿರದು, ಹೀಗೆಂದು, ಹಳೆಯ, ಹೊಸದು ಇವೆರಡು ವಿಧದ ಛಂದೋಬಂಧಗಳ ಕೆಲವು ಕವಿತೆ, ಗೀತಗಳನ್ನಿಲ್ಲಿ ಪ್ರಕಟಿಸಲಾಗಿದೆ. ಗ್ರಂಥಕರ್ತನ ಮೊದಲಿನ ಕೃತಿಗಳಿಗಿತ್ತ ಸ್ವಾಗತವನ್ನು ಇದಕ್ಕೂ ಅಭಿಜ್ಞರಾದ ಕನ್ನಡಿಗರು ಕೊಡುವರೆಂದು ನಂಬುಗೆ. ಪುಸ್ತಕವಿದನ್ನು ಇಷ್ಟು ಸುಂದರವಾಗಿ ಪ್ರಕಟಿಸಲು ನೆರವಾದ 'ಅಜ್ಞಾತ' ವ್ಯಕ್ತಿಯ ಔದಾರ್ಯವು ಚಿರಸ್ಮರಣೀಯವಾಗಿದೆ.

ವಿ. ಸೂ.—ಗೀತೆಗಳ ಪ್ರತಿನುಡಿಯ ಕೊನೆಗೂ ಅರ್ಥ ಸಂಪೂರ್ತಿಗಾಗಿ ಪಲ್ಲವಿಯನ್ನು ಸೇರಿಸಿ ಓದಬೇಕು.

# ಹೂ ಗೊಂಚಲು

---

## ಮೊದಲ ಮಾತು

ಈ ವಸಂತವಾತದಲ್ಲಿ
ನೇಹನೇಣಬಿಗಿತದಲ್ಲಿ
ನಲಿವುಗೆಲವುಮುಕುಲ ಎದೆಯೊ
  ಳೊಲಿದು ಅರಳಿವೆ.
ಭಾವದೊಂದು ಒರತೆಯಿಂದ
  ಹಾಡು ಹರಿದಿದೆ.

ಪ್ರೇಮಗಾನರೇಣುವೊಂದು
ಗಾಳಿಯಲ್ಲಿ ಸುಳಿದುಸುಳಿದು
ಅರಳಿದಲರಿನೆಸಳ ನಡುವೆ
  ಮನೆಯ ಮಾಡಿದೆ.
ಕಾಮಿಯಂತರಂಗಕೊಂದು
  ಮೊನೆಯ ಹೂಡಿದೆ.

ಕಡಲ ತೆರೆಯ ಮಧುರಗೀತ
ಕವಿಯ ಎದೆಯನಾದಿಸುತಲಿ
ರಾಗಲತೆಯೊಳೊಂದು ತಳಿರ
  ಕುಡಿಯ ತೋರಿದೆ.
ಒಡಲ ಜಡತೆ ಕರಗಿ ಬಲದ
  ಬೆಳಕು ಸಾರಿದೆ.

ಸಂಜೆಯಾಗಸದಲಿ ಹೊಳೆವ
ತಾರೆಯೊಂದು ಕವಿಯ ನೋಡಿ
'ಕವಿಯೆ, ಭಾವವೀಣೆಗೊಂದು
  ನಾದವೀ'ಯೆನೆ,
ಅಂಜಿ, ಅಂಜಿ, ವೀಣೆ ಇಂತು
  ಬಾಜಿಸಿರುವನೆ!

ವೀಣೆಯುಲಿವ ದನಿಗಳೆನಿತೊ,
ಎನಿತು ಇನಿದೊ ದನಿಗಳನಿತು,
ಇನಿಸು ರಾಗದರಿವು ಕೊಳದೆ
  ನುಡಿಯನೊಲಿಸಿದಂ.
ವಾಣಿಗಿಂತು ಕವನಕುಸುಮ
  ಹಾರ ಸಲಿಸಿದಂ.

---

## ಪ್ರಾರ್ಥನ— ಪೂಜೆ

ಮಧುರಮಂದಾಕಿನಿಯ ಸಂಗೀತಸಾರದಿಂ
ಹೃದಯಕಲುಷಿತಭಾವ ಮಾಯವಾಗೆ!
ಮಂದಮಲಯಾನಿಲನ ಆಂದೋಲನದ ತಂಪಿ
ನಿಂದ ಮಂಜುಲಗಾನಝುರಿಯು ಹರಿಯೆ!
ಗಗನರಂಗೋತ್ತುಂಗವಾ ಹಿಮಾಲಯಶಿಖರ
ಕರಗಿ ಗಂಗಾವಾರಿಯಾಗಿ ಹರಿವೊಲ್
ಎನ್ನಮನದುನ್ನತದ ಭಾವವದು ಮೃದುವಾಗಿ
ಪ್ರವಹಿಸಲಿ ಕಾವ್ಯನದಿಯಾಗಿ ಹರಿಯೆ!
ಸಂಧ್ಯಾರುಣನ ಕಿರಣಸಂದೋಹವಂ ಶರಧಿ
ಜಲದೊಳೊಂದೊಂದಾಗಿ ಕರಗಿಸುತಲಿ
ಮಂಗಲೋಕುಳಿಗೈದು ತಾರೆಗಳ ಸೇಸೆಯಂ
ತಳಿವೆ ಮುನ್ನೀರೊಡೆಯ! ನಿನ್ನ ಪದಕೆ.

## ಯಾತ್ರಿಕರು

ಬಳಿಯ ಬೆಟ್ಟದಲಿ ಗೋವಳರ ಕೈಗೊಳಲಿನಿಂ
ದುಲಿವ ಮೆಲ್ದನಿಯೊಂದು ಕೇಳುತಿಹುದು.
ಎಳೆದಳಿರ ಮರ್ಮರದ ತಿಳಿನುಡಿಯ ಹಾಡ ತಂ
ಬೆಲರು ಕಿವಿಯೊಳ್ ತಂದು ತುಂಬುತಿಹುದು.

ಊರದೇಗುಲದ ಘಂಟಾರವವು ದೂರದಿಂ
ಸಾರಿಬಹ ಸಂಜೆಯನ್ನರುಹುತಿಹುದು.
ಕೇರಿಕೇರಿಗಳ ಮನೆಯೋರಂತ ದೀವಿಗೆಯು
ಬಾರಿಬಾರಿಗೆ ಮಿಣುಗಿ ಬೆಳಗುತಿಹುದು.

ಮೆಲ್ಲೆಲರು ಸೂಸುತಿಹ ಸಲ್ಲಲಿತ ಪರಿಮಳವು
ಇಲ್ಲಿ ಹಗಲೊಳು ಹೂಗಳರಳಿರುವುವೆಂ
ದುಲ್ಲಸದಿ ಸೊಲ್ಲಿಲ್ಲದುಲಿಸೆಲೆಯ ಬೀರುತಿದೆ
ಚೆಲ್ಲಾಟವಾಡುವೀ ಹೊಳೆಯ ನೀರೊಳ್.

ಗಿರಿಯಿಂದ ಹರಿದುಬರುವೀ ತರಂಗಿಣಿಜಲದೊ
ಳಾರದೀ ಇರುಳು ಸಂಚರಿಸುತಿಹುದು?
ಮಿರುಗುತಿಹ ಧ್ರುವತಾರೆ ಹರಿವ ದಾರಿಯ ತೋರೆ
ಗರಿಮೋಡವೇರಿ ಬೆಳಕನ್ನೀವುದು.

ಆಳವಾದೀ ನದಿಯು ಬೀಳೆ ಕೋಡ್ಗಲ್ಲಿನಿಂ
ಗೋಳೆನುತ ಮರುಮರುಗಿ ನಿಡುಸುಯ್ಯಲು,

ಕಾಲಧೂಮವು ಅದರಿನೆಳ್ದು ಬಿತ್ತರಿಸಿದೊಲು
ಗಾಳಿಯೊಳು ತೀವಿಹುದು ಕರಿಯುಮುಬ್ಬು.

ಪರಿದೊರೆಯ ನಡುವಿನೊಳಗೀ ಯಾನಪಾತ್ರದೊಳ್
ತ್ವರೆಗೈದು ಸಾರುತಿಹ ಠಾವಾವುದು?
ನೆರೆಯೂರಿನೊಳ್ ನಾಳೆ ನೆರೆವಹಬ್ಬದಿ ನಯನ
ಪಿಂದೂಟವಂ ಸವಿಯಲಾತುರಿಪುದೆ?

ತಳಿರಿಂದಲಲರಿಂದ ಸಿಂಗರಿಸಿದಾ ತೇರ
ಬಳಿಗೈದಿ ನಾಳಿಕೇರವನೊಪ್ಪಿಸೆ
ತಿಳಿವುಹೂವಳ್ಳಿಯೊಳು ಮಾಳ್ಕೆಯೆಂಬಾ ಕುಸುಮ
ದಳಬಿರಿದು ಭಕ್ತಿಮಧುವಂ ಸೂಸಲಿ!

ಮಾತುಕೊಟ್ಟಹನವನು ಮತಿಯನಿತ್ತಿಹನವನು
ಮಾತುಮತಿಯೊಂದಾಗಲವನ ಪದದಿ
ಪೂತಚಿತ್ತವನಿರಿಸಿ ಹೊಳೆವ ಪಳುಕಿನತೆರದ
ಹೃತ್ತಲದೊಳವನಡಿಯ ನೆಲೆಗೊಳಿಸಿರಿ!

ನಿಮ್ಮ ನಾಡಿನ ಹೆಸರ ಮರೆಯದಿರಿ ಯಾತ್ರಿಕರೆ
ನಿಮ್ಮೂರಿನೀ ದೀನಜನವೃಂದವ!
ನಿಮ್ಮ ಹೊಳಲೊಳಗರಂ ನೆರೆಪೊರೆಯುತಿರಲೆಂದು
ಒಪ್ಪಿಸಿರಿ ಮನವನಾ ದೇವನಡಿಯೊಳ್!!

## ಎಲ್ಲಿರುವನೆಂತಿರುವ

ಎಳೆದಳಿರಿನ ಪಸದನಗಳ ಮರ್ಮರದನಿಯನು ಮಾಡುತ
ತಿಳಿನೀರಿನ ಕಾಳ್ಪುರದಲಿ ಪೊಲುದನಿಗಳ ಪದಹಾಡುತ
ತಂಬೆಲರೊಳು ಸುಯ್ಯೆಂಬುವ ಸಂದೇಶವನಿರದಟ್ಟುತ
ಕಣ್ಣಿಗೆ ಕಾಣಿಸದಂತೆಯೆ ತನ್ನಯ ನೆನಹನೆ ಕೊಡುವನು.

ತಂಗಾಳಿಯ ನುಣ್ದುಟಿಯಿಂ ಬೆಳ್ದಿಂಗಳ ಚುಂಬಿಸುತಲಿ
ತಂಗದಿರನ ನೀಳ್ನೋಟದಿಸಂಗಡಲನೆ ಬಿಡದುಕ್ಕಿಸಿ
ತುಂಬಿಯ ಬಂಬಲವೆಂಬುವ ಶೃತಿಯೊಳು ಸರವೊಂದಾಗಿಸಿ
ಕಣ್ಣಿಗೆ ಕಾಣಿಸದಂತೆಯೆ ತನ್ನಯ ನೆನಹನೆ ಕೊಡುವನು.

ಕಾರಿರುಳಿನ ಕಾರ್ಮೋಡದ ಗುಹೆಯೊಳು ತಾನಡಗಿರುತಲಿ
ಕೋಲ್ಮಿಂಚಿನ ಕಿರುನಗೆಯಿಂ ಬಾಂದಳವನೆ ಬೆಳಕಾಗಿಸಿ
ಗುಡುಗಿನ ಬಲ್ದನಿಮಾಡುತ ಆಗಸದೊಳು ಬಿಡದಾಡುತ
ಕಣ್ಣಿಗೆ ಕಾಣಿಸದಂತೆಯೆ ತನ್ನಯ ನೆನಹನೆ ಕೊಡುವನು.

ಮುಂಜಾವಿನ ಮುಂಬೆಳಕಿನೊಳರುಣಧ್ವಜವನ್ನೆತ್ತುತ
ಪೊಂಗದಿರನ ಬರಸಾರುತ ಇಳೆಯನು ಬೆಳಕಿನ ಕಡಲೊಳು
ಮುಳುಗಿಸುತಲಿ ಮೂಡಣಬೆಟ್ಟದ ತಪ್ಪಲ ಹಿಂಬದಿಯಲಿ
ಕಣ್ಣಿಗೆ ಕಾಣಿಸದಂತೆಯೆ ತನ್ನಯ ನೆನಹನೆ ಕೊಡುವನು.

# ತಾರೆ, ಮುಗುಳು

ಸಂಜೆಗೆಂಪುಪಸರದೆಹಿಂದೆ ಸಿಂದು ಕಡಲಕನ್ನಡಿಯಲಿ
ರಂಜಿಪ ನಿಜಬಿಂಬಸಿರಿಯ ನೋಡಿನಗುವ ನೇಸರನಲಿ
ತುಂಬಿಹರಿನ ಮೋನವೀಂಟ ಧರಣಿ ಜೋಂಪುವಡೆದಿರುತಿರೆ
ಅಂಬರದಲಿ ತಾರೆ ಸುರಭಿಸಾದರಜಡುಕೂಲದೊಳಗೆ

ಸಿಂದು ಬೆಳಕನುಳಯ ಸುರಿಯೆ ತಳಿರಕದವ ತೆರೆದು ಲತೆಯು
ತನ್ನ ಮುದ್ದುಮಗಳು ಮುಗುಳ ಗಾಳಿಯಾಟಕಾಗಿ ಬಿಡಲು
ಮಿಟ್ಟೆ ಅದುವೆ ಅರಳಿ ಹೊಳಪಹೊನಲ ಸೂಸುತಿರುವ ಚುಕ್ಕೆ
ಯನ್ನು ಕಂಡು ಅದರ ಜಸವ ಇರದೆ ತಾನೆ ಅಳಿಸ ಬಯಸಿ

ಬಲಿತು ಬಲಿತು ರಸದಿ ಗಲಿತವಾಗಿ ಅರಳಿ ಕಂಪಸೂಸಿ
ಚೆಲುವತಾರೆ ಇರವನರಿಯೆ ಮೇಲೆ ಆಗಸವನು ನೋಡೆ
ತನ್ನ ಕೀರ್ತಿಲತೆಯ ಕಡಿವ ಮುಕುಳ ಬಿರಿದು ನಲಿವುದರಿತು
ಖಿನ್ನವಾಗಿ ತಾರೆ ಅಳಿವುಬಟ್ಟೆವಿಡಿದು ಮಾಯವಾಯ್ತು.

ಬಾಡಿದುಡುವ ಕಂಡು ಮಿಟ್ಟೆ ನಗುತ ಜಗವನಾಳುತಿರಲು
ತುಂಬಿ ಅದರ ರಸದ ಮದವ ಹೀರಿ ಮೊರೆದು ಹಾರುತಿರಲು
ಕುಸುಮ ಮುಪ್ಪಿನಿಂದಕಂದಿ ಮೋನವಾಂತು ನಿಂತುದರಿತು
ಜಸವಬೀರಿ, ಇರುಳ ತೂರಿ ಮೆರೆಯೆ ತಾರೆ ಮೂಡಿತಲ್ಲಿ!

## ಇರುಳೆ!

ಪೊಂಬಿಸಿಲಿನಿಂಬಿನಲಿ ಕಳ್ಳಹಜ್ಜೆಯನಿಕ್ಕಿ
ಬಿಂಬಿಸುವ ನಿನ್ನ ತವರೂರಾವುದೌ?
ತುಂಬಿಹರಿಯುವ ನಿನ್ನ ಜೀವದೆಲ್ಲೆಯು ಹಗಲೆ?
ಮುಂಬೆಳಗಿನೊಳಗೆಲ್ಲಿ ಮರೆಯಾಗುವೆ?

ನಿನ್ನ ನಾಡದು ಮೋನ ಬೀಡು ನಿನ್ನದು ಕಾಡು
ಮುನ್ನ ಹಗಲಿಲಿ ಹಂದರವ ಸಾರುವೆ?
ನಿನ್ನ ನೆರಳೊಳು ಕುಳಿತು ಇನ್ನೆನಿತೊ ಹಾಡಿದರು.
ನಿನ್ನ ನೆನಹಿನಕನಸ ಮುನಿಗಳವರು.

ಇರುಳೆ! ನೀನಾಣ್ಣೆ ಬೆಳಕಿನಸಿರಿಯ ಬಯಸದಿರೆ
ಮರುಳೆಂಬರದುಕತದಿ ನಿನ್ನನೆಲ್ಲರ್.
ಮರವು ಎಂಬೀ ಮನದ ಕಳ್ತಲೆಯ ಹೊರರೂಪ
ಇರುಳೆ ನೀನೆಂದು ನಿನ್ನನು ಹಳಿವರು.

ನಿನ್ನ ಕೈಕರವಾಲ ವನದೆಲರ ಸೀಳುತಲಿ
ಕಣ್ಣತಣಿಪಲರುಗಳ ಸವರುತಿಹುದು.
ಬನ್ನಬಡಿಸುವ ನಿನ್ನ ಬರವ ಹಾರೈಸುತಲಿ
ನಿನ್ನ ಗೆಳೆತನಬಯಸಿ ನಿಲುವನಾರೌ?

ಇರುಳೆ ನಿನ್ನಾಳ್ಕೆಯಲಿ ತಿರೆಯು ತೂಕಡಿಸುತಿರೆ
ಸರಿಯೆಂದು ಮೆರೆಯೆಂದು ನುಡಿವರಾರೌ?

ಬರಿದಾಗಿಸುವೆ ಮನವ ಪಿರಿದಾಗಿಸುವೆ ಮುದವ
ಸರಿಯುಬೇಕೆಂದು ಬೇಡುವೆ ನಿನ್ನನು.

ಆವಾವ ನಳಿನಿಯರ ಮೊಗವ ಬಾಡಿಸಿದೆ ನೀ
ನಾವನಾರಿಯು ಬಗೆಯುಬಯಲಿನೊಳಗೆ
ಭಾವಜನ ಬಿತ್ತುಬಿತ್ತಿದೆ? ಇರುಳೆ ಮೋಹದಿಂ
ತೀವಿಭೂವಲಯುವಂ ನಲಿಯುತಿಹೆಯಾ

'ಎನಿತೊ ಪಾಪವಗೈದ ಹರಣವಿದರನ್ನುಳಿವೆ'
ನೆನುತೆ ನೀ ಹಗಲೆಂಬ ಕಡಲಿನೊಳಗೆ
ಕೊನರಿಸಲು ದುಗುಡ ದುಮುಕುವೆಯಾದೊಡಂ ಮುಗುಳ್
ಸಮನಿಸುವ ಸಂಜೆಯಲಿ ಸಂಜನಿಸುವೆ!

ಇರುಳೆ! ನಿನ್ನೀ ಮೊಗದ ಕರಿಯು ಮುಸುಕಂ ತೆಗೆದು
ಬೇರಲ್ಲ ನೀನು ಹಗಲಿನ ಮಾತೆ ಎಂ
ಬರಿವ ನೀಯೌ ಜಗಕೆ, ನಿನ್ನಕುವರನ ಬಠವ
ನಿರದಿದಿರುನೋಡುತಿರುವೆಮ್ಮ ಬಗೆಗೆ.

---

# ನೀತಿ

ಕಡಲತೆರೆಯಿಂದೊಗೆವ ಸಂಗೀತಸರಸತೆಯು
ಜಡವಾದ ಮಳಲೊಟ್ಟಲಳೆವುದೆಂತು?
ತಳಿರಿಡಿದ ಮಾಮರದಿನುಲಿವ ಕೋಗಿಲೆಸರವ
ಬಳಿಯ ಹಳುಬಳಗವದು ಸವಿವುದೆಂತು?
ಮಲ್ಲಿಗೆಯ ಮಲರ ತನಿಗಂಪು ಗಾಳಿಯಲೆಳೆಯೆ
ಹುಲ್ಲದರ ಹೆಚ್ಚಳವನರಿವುದೆಂತು?
ಹೊಳೆತಡಿಯ ಪುಳಿನದಲಿ ತಳುವಾಗಿ ಪಡಿನೆಳಲ
ತಳೆವ ತಿಂಗಳ 'ಜಡತೆ' ನೋಳ್ಪುದೆಂತು?
ಹೊಳೆಯುನಾಗಸದೊಳಗೆ ಸುಳಿವ ಪೆಲ್ಲೆಲರಿನಲಿ
ತಿಳಿಯಾದ ಸಂಗೀತ ಅಲೆಗಳೊಲಿಯೆ
ಆರ ನುಡಿ ಆ ಕವನ? ಆರ ಕೊಳಲಿನ ಜೀವ?
ತೋರಿ ಸಾರದ ಅದರನರಿವುದೆಂತು?

* * * * *

ಹೊಳೆವ ತಾರಗೆಯೊಳಗೆ, ಬಿರಿವ ಕಿರಿಮುಗುಳೊಳಗೆ
ಇಹುದೊಂದು 'ತತ್ವ'ವೆಂಬರಿವು ಬಹುದು;
ಇಳೆಯುನಾವರಿಕಿರುವದೊಂದು ಕಳೆಯಾ ತತ್ವ,
ವಿಹಿತಜೀವನದೊಳಗದಡಗಿ ಇಹುದು.
ಕೊಳಲೆಂದು ನೇಹಹಿಡಿತದಿ ಅದರನೊಪ್ಪಿಸಲು
ತಳುವದೇ ಮನದೊಳದನೊಪ್ಪಿಕೊಳಲು,
ಗಳಿಗೆಬಟ್ಟಲುಬಾಳ್ವೆ ಇಹುದೊಂದು ಹಿಡಿತದಲಿ,
ತಿಳಿವಹುದು ಬಿಗಿತವದು 'ನೀತಿ'ಎಂದು.

# ಶ್ರದ್ಧಾನಂದ ಶ್ರದ್ಧಾಂಜಲಿ

ಎಲ್ಲಿ ಮೌನಾನಂದವಮೃತಝರಿ ಹರಿಯುತಿಹುದೊ,
ಎಲ್ಲಿ ತಡಿಯೊಡೆಯುತಿಂಗಡಲು ಭೋರ್ಗರೆಯುತಿಹುದೊ,
ಎಲ್ಲಿ ಅಲರುಗಳೆಲ್ಲ ಬಾಡದೋಲರಳುತಿಹವೊ,
ಎಲ್ಲಿ ಯನಿಶಂ ಹರಯುತಂಗಾಳಿ ತೀಡುತಿಹುದೊ,
ಅಲ್ಲಿರುವ ನಿನ್ನಾತ್ಮಕೆನ್ನ ಶ್ರದ್ಧಾಂಜಲಿ ಇದೊ!

ಎಲ್ಲಿ ನಿನ್ನಾನಂದನಿಶ್ವಾಸವಾನಂದಮುರಲಿಯೊಳ್ ತೀವುತಿಹುದೊ,
ಎಲ್ಲಿ ನಿನ್ನಾತ್ಮಾರವಿಂದನಿಶ್ಚಲತತ್ವಮಧುರಸವ ಸುರಿಸುತಿಹುದೊ,
ಅಲ್ಲಿ ಕರೆ, ಮರೆ, ಮರವು ಮೆರೆಯದಿರೆ ನಿನ್ನಾತ್ಮಕೆನ್ನ ಶ್ರದ್ಧಾಂಜಲಿ ಇದೊ!

ದೀನರೊಳು, ದಳಿತರೊಳು, ಪತಿತರೊಳು ಕಾರುಣ್ಯಸಿಂಧುಸಂಭೂತನಾಗಿ
ಮಾನವರ ಗತಿಯರಿತು, ಕೇಣವಿಲ್ಲದೆ ಬೆರೆತು, ತಲ್ಲೀನತಾತ್ಮನಾಗಿ,
ಎಲ್ಲಿ ಮೆರೆವೆಯೊ ನಿನ್ನ ನಾಡನುದ್ಧರಕಾಗಿ, ಎನ್ನ ಶ್ರದ್ಧಾಂಜಲಿ ಇದೊ!

## ಮನೋರಮೆ

(ಮೃದುಗದ್ಯ)

ಅಲ್ಲಿ ತೋರುವ ನೀಲಗಿರಿಯ ತಪ್ಪಲಿನಲ್ಲಿ
ಅಲ್ಲಿ ಹರಿಯುವ ಸ್ಫಟಿಕಝರಿಯ ತಡಿಯುಗಲದಲಿ
ಅಲ್ಲಿ ಹಚ್ಚಗೆಹಸರು ಹುಲ್ಲುಗಾವಲಿನಲ್ಲಿ
ಫುಲ್ಲಪುಷ್ಪದ ಗುಚ್ಛಭಾರದಿಂ ಬಳುಕುತಿಹ
ಆ ಲತಾಕುಂಜದೊಳು ಕುಳಿತು ವಿಹರಿಸುತಿರುವ
ಚೆಲುವ ಮೂರುತಿಯೊಂದು ಕಣ್ಗೆಸೆದುದು.

ತಳತಳಿಪ ಮೊಗದಲ್ಲಿ ಹೊಳೆವ ಕೆಂದುಟಗಳಲಿ
ಇಣಿಕಿ ಅರಳುತಲಿಹುದು ನಗೆಯೊಂದು; ಅದರಿಂದ
ಬಲುಚೆಲುವು ಆ ರೂಪು ನಡುಹರಯವನು ಹೂವು
ತೆಳುವಾಗಿ ಸೌರಭವ ಸೂಸುವೊಲು ತೋರುವುದು;
ಆ ಗಿರಿಯ ನೈರ್ಮಲ್ಯ ಕುಡಿಯೊಡೆದುದೆಂಬಂತೆ
ಹೂವಳ್ಳಿಯುಯ್ಯಲೆಯೊಳೋಲಾಡುವಾ ನಾರಿ
ಬೆಳಗುವಳು; ಬೀಸುತಿಹ ತಂಗಾಳಿಸೋಂಕಿನಿಂ
ಅಲಗುವಳು; ಒಮ್ಮೊಮ್ಮೆ, ಮುಗಿಲಿನೊಳು ಮರೆಯಾದ
ತಿಳಿಯತಿಂಗಳನಂತೆ ನಗೆಯುಳಿದ ಮೊಗದೋರಿ
ಹುಬ್ಬುಗಂಟಿಕ್ಕುವಳು; ನೋಡುವರಿದೇನೆಂದು
ಅಚ್ಚರಿಯನಾನುವರು; ಆಕೆ ನೈರಾಶೆಯಿಂ
ಬಳಲಿಹುದ ಕಾಣುವರು; ಆಕೆ ಆರಿಲ್ಲಿರಲು
ಕಾರಣಗಳೇನೆಂದು ಶಂಕಿಪರು; ಅರಿಯದಿರೆ

ನೊಂದು ನಿಟ್ಟುಸಿರಿಡಲು, ತಂಗಾಳಿ ಸಾರುವುದು
ಆ ನಾರಿ, ಸುಂದರಿಯು, ಇರವನಿಂತು:

ಈಕೆ, ಈ ರೂಪವತಿ, ವಿಧಿವಶದಿನಿಲ್ಲಿಹಳು;
ತಾ ಮನೋರಮೆ ಎಂದು ಹೆಸರು; ಕೇಳಿದರೆಲ್ಲ
ನೋಡಲೆಳಸದೆ ಇರರು; ನೋಡಿದಡೆ, ಈ ಹೆಸರು
ಈ ರೂಪು, ಯೌವನಕೆ ಸರಿಯುಪ್ಪುದೆನ್ನುವರು.
ಈ ಹೊಳಲ ಹೆಗ್ಗಡೆಯ ಮುದ್ದುಮಗಳಿವಳೊಮ್ಮೆ
ಅರಮನೆಯ ಹಿಂಗಡೆಯ ಹೂದೋಟದಲಿ ಕುಸುಮ
ಸಂಕುಲವ, ಚಿಗುರುಗಳ, ಹಣ್ಣುಗಳ ಕೊಯ್ಯುತಿರೆ,
ನಗುಮೊಗದ, ಕರಿಯಕಣ್ಣಾಲಿಗಳ, ನಳಿತೋಳ,
ತುಂಬಿಹೊಳೆಯುವ ಕೆನ್ನೆಗಳ, ಉಬ್ಬಿರುವ ತೊಡೆಯ,
—ಸೌಂದರ್ಯವೇ ರೂಪುಗೊಂಡು ನಿಂತಂತಿರುವ—
ತರುಣನೋರ್ವನ ಕಂಡು ನಿಲ್ಲುವಳು; ಬಿಸಿಲ ಬಲು
ಬೇಗೆಯಿಂ ಕೈಯೊಳಿಹ ಹೂಗಳವು ಬಾಡಿಹವು;
ಹಿಂದುಮುಂದಕೆ ಸರಿಯೆ ಕಾಲುಬಾರದೆ ಇಹವು;
ನೀಳ್ನೋಟ, ಮುಗುಳುನಗೆ, ಅಗಲ ಅರಳಿದ ಕಣ್ಣು,
ನಡುಗುತಿಹ ತುಟಿಗಳವು, ನಾರಿ ನಿಂತಳು ಅಲ್ಲಿ
ಕಲ್ಲಿನೊಳು ಕೊರೆದ ಸುಂದರ, ಶ್ವೇತಮೂರ್ತಿಯೊಲು!

ಯೌವನದ ರಾಜ್ಯದಲಿ ಕಾಲಿಡುವ ಸಮಯದಲಿ,
ಪ್ರಣಯಾಂಕುರಗಳಿಂತು ಮೊಳೆದು ತೋರುವುದಲ್ತೆ?
ಆ ಮನೋಹರೆ ಓರೆನೋಟದಿಂ ತರುಣನಂ

ನೋಡುವಳು; ಲಜ್ಜೆಯೆಂಬರಳಿದಲರಂ ಕಿಳ್ತು
ಹಿಗ್ಗಿದಳು ಯುವಕ ತನ್ನವನಹನು ಎಂದಲ್ಲಿ.
ಅಳುಪಿನೇಳ್ತರದಲ್ಲಿ ತನ್ನ ಪ್ರೇಮದ ಬಾಣ
ಗುರಿತಪ್ಪಿ ಬೀಳುವುದನಾಕೆ ತಿಳಿಯದೆ ಇಹಳು!

ಶಾಂತಿಸೌರಭವು ಎಲ್ಲೆಡೆಗಳಲಿ ಹರಡಿಹುದು;
ನೇಸರನತಾಪಮುರೆಕಂದಿಕುಂದುತಲಿಹುದು;
ಅರಳಿರುವ ಹೂಗೊಂಚಲೆಲ್ಲ ಸಂಜೆಯು ಬರವ
ಇರದೆ ಸೂಚಿಸುವಂತೆ ಬಾಡಿಬಾಗುತಲಿಹವು;
ಆದೊಡಾಕೆಯ ಹೃದಯಪ್ರೇಮಕುಸುಮವದೊಂದು
ಬಳಲಿಕೆಯನರಿಯದೆಯೆ ಬಲುಬೀಗಿ ಬಿರಿದಿಹುದು.
ಹಜ್ಜೆಮುಂದರಿದಂತೆ ಮಾತುಮುಂದರಿದಿಹುದು,
‘ನಿನ್ನ ರೂಪಕ್ಕೆ ಸೋತು, ನಿನ್ನಬಳಿ ಸಾರಿಹೆನು;
ನಿನ್ನ ಚುಂಬನದಿ ತಣ್ಪಿದೆಯು ಬಯಸುತಲಿಹೆನು.’

ಇಂತುಸುರಲಾ ತರುಣನಾವುದೋ ನೆನಹಿನಲಿ
ಚುರ್ಚಿದೆದೆಯಂ ತಳೆದು ನುಡಿದ‘ನಲೆ ಬಾಲೆ ಕೇಳ್
ಹರಯದೇರಿಕೆಯಲ್ಲಿ ಹೊಲಬುದಪ್ಪುವರುಂಟು;
ಅಳುಪಿನುರುಬೇಗೆಯಲಿ ತಿಳಿವುನನೆ ಬಾಡುವುದು;
ಆದೊಡದರಲಿ ಗೆಲ್ದು, ಪ್ರಣಯಮುಕುಲವ ಕಿಳ್ತು,
ಆತ್ಮತತ್ವವ ಬಳೆಸಿ ನಲಿವ ಇರವದು ಇರವು.
ಅದುಕತದಿ ದುಮುಕದಿರು ವಿಷಯಕಾಳಿಂದಿಯಲಿ.’

ನನೆವಿಲ್ಲ ನುರುಬೆಯುಲಿ ನೀತಿಮಾತುಗಳೆಲ್ಲ
ಮಾನಿನಿಯ ಮನದೊಳಗೆ ವಿಫಲವಾಗಿಹವಲ್ಲಿ;
ಎದುರುನೋಡಿರದೆರಡು ದುಗುಡ ಒದವಿಪ ನುಡಿಯ
ಕೇಳಲಾಶಾತಂತು ಹರಿದು ಹಾಳಾಗಿಹುದು.
'ಪ್ರಣಯದೀ ಕಣ್ಣೀರಕುಸುಮಸಂಕುಲವಿದನು
ತಣಿಸು ಸವಿಮಾತಿನಲಿ, ನಿನಗಿನಿಸುಮಘವಿಲ್ಲ;
ತಿಳಿಯುತಂಗಾಳಿ ಪರಿಮಳವ ತರುವಂತೆನ್ನ
ನಿಟ್ಟುಸಿರು ತರುತಿಹುದು ಪ್ರಣಯದಾಶೆಯನಿದೊ!'
ಇನಿತೊಂದು ಮಾತಾಡಿ, ಆಶಾನಿರಾಶೆಗಳ
ಗೊಂದಲದಿ ಸಿಲುಕಿರುತ, ಅರೆಭಯದ ನೋಟದಿಂ,
ದುಃಖದೆಳೆನಗೆಯಿಂದ, ನಳಿತೋಳುಗಳ ನೀಡಿ
ಹೃದಯಾಣ್ಮನೆಂದವನ ಬಿಗಿಯಪ್ಪೆ ಮುನ್ನಡೆದು
ಮೌನತೆಯ ಮುಸುಕಿನೊಳು ಮರೆಯಾಗಿ ನಿಂದಿಹಳು.

ಒದವಿದಾ ಮುಂಗತೆಯನೊರೆಯಲೆನ್ನೆದೆಯಳಲು
ಮಿಾರಿಮುಗ್ಗುರಿಸುತಿದೆ. ಹರಯವೊಂದೆನಗುಂಟು;
ಪ್ರಣಯಪೆದೆ ಇಹುದೆನಗೆ; ಸೊಗದಳುಂಬಿನ ಆಸೆ
ಗಳಿಗೆಗಳಿಗೆಗೆ ಬಲದಿನೊಪ್ಪುಗೊಂಬುದನರಿತ
ಈ ಹೃದಯ ಕನಿಕರದಿ ಕರಕರಗಿ ಹರಿದಪುದು.
ಆದೊಡೇನೀ ಕಥೆಯನರೆದಾರಿಯೊಳೆ ನಿಲಿಸೆ
ಕೇಳುವರ ಆಸೆಗುಕ್ಕಡವ ತೊಡಿಸಿದ ಪಾಪ
ಬೆಂಬತ್ತಿ ಬರಬಹುದು; ಅದರಿನೀ ಕಥೆರಸವ
ಹರಿಯಿಸುವೆ ನಿಮ್ಮೆದೆಯೊಳು.

ನಡುಹರಯದಾನಾರಿ ನುಡಿದ ನುಡಿ ಗಾಳಿಯಲಿ
ತೇಲಿಪೋಗುವ ಮಧುರವೀಣಾನಿನಾದದೊಲು
ತರುಣನಾತುರವ ಹೆಚ್ಚಿಸದೆ ನಿಷ್ಫಲವಾಯ್ತು.

ಆಚಣದೊಳಚ್ಚರಿಯದೊಂದಾದುದಲ್ಲಿ ಆ
ಜವ್ವನಿಗ ಮಾಯವಾದನು, ಯುವತಿ ಅಳುತಿರಲು
ಎಂದಿನಂತೆಯೆ ಗಾಳಿ ತೀಡಿದುದು; ಆಗಸದಿ
ಮೂಡಿದುವು ತಾರೆಗಳು; ಶೀತವಾತಾವರಣ
ಎಲ್ಲೆಡೆಯು ತೀವಿರ್ದೊಡಾ ನಾರಿಹೃತ್ತಲದಿ
ಧಗಧಗಿಪ ಬೆಂಕಿಯೊಲು ತಾಪ ಉಕ್ಕುತಲಿಹುದು . . . . .

ಅಂದಿನಿಂದಾ ನಾರಿ, ಸೌಂದರ್ಯದೆಳೆಲತೆಯು,
ಈ ವನದೊಳೀ ಝರಿಯ ಈ ಬಯಲುಭೂಮಿಯಲಿ,
ಎಲೆವನೆಯೊಳುಳಿದಿಹಳು; ಬಾಡದಿಹ ಹೂವಿನೊಲು,
ಪರಿಮಳವ ಸೂಸುವಳು; ಹೊಸಹಣ್ಣಗೊಂಚಲೊಲು
ತನಿರಸವ ಸುರಿಸುವಳು. ರೂಪವತಿಯಾಕೆ ಈ
ಹೃದಯಭೇದಕಕಥೆಯ ಕೇಳಿ ಮರುಗದ ಎದೆಯು
ತಿರೆಯೊಳಿದೆ ಎಂತಪ್ಪುದೊ!
ಜಗದಿ ಸಂಸಾರ,
ಮಂದಿ, ಮನೆ, ಮಠ, ಮಕ್ಕಳೊಂದುಃ ಕನಸಿನ ಪಠದ
ಗೊಂಬೆಯೊಲು ತೋರಿ ಕೆಲಗಾಲ, ನನೆಯೊಲು ಬಾಡಿ
ಆ ಲತೆಯ ಸೊಬಗ ಸವಿಗನಸುಗುಡಿಯನು ಮುರಿದು
ನೆಲಕೆ ಬೀಳುವ ತೆರನ ತೋರುವುದು, ಸಹಜವಿದು!

## ಮಳೆಮುಗಿಲ ತಾರೆಗಳು

ಕಾರಿರುಳ ಬಾಂದಳದಿ ಬೆಳಕುಬಲ್ದೆರೆಪರಿಯು
ಲೋರ್ವೈಸಿ ಗೋಚರಿಸಿತೊಂದು ಮೇಘಂ
— ಸಾರಿರುವ ಕತ್ತಲೆಯ ಪಾಳಯದ ಕೊತ್ತಲಂ —
ಬೀರುತಿದೆ ಕಿಡಿಯೊಂದು ಹೊಳೆವ ಸರಲಂ.

ಕೊಳದ ನೈದಿಲೆಯವೊಲು ದಳವನಗಲಿಸಿ ಮೋಡ
ಎಳೆಮಿಂಚ ರೋಚಿಯೊಳು ಅಲುಗುತಿಹುದು.
ನಲಿವ ಮುಗುದೆಯ ಮುಡಿಯ ಕುಸುಮಹಾರಗಳಂತೆ
ಬೆಳಗುತಿವೆ ತಾರೆಗಳು ಮುಗಿಲ ಮಲೆಯೊಳ್.

ನೀಲನೀರದವೆಂಬ ಹರ್ಮ್ಯ ವಿದ್ಯುದ್ದೀಪ
ಮಾಲೆಯೊಲ್ ಪೊಳೆವ ನಕ್ಷತ್ರನಿಚಯಂ
ಗಾಳಿಯುನ್ಮೀಲ್ವೈಪ ಸುರಭಿಸಲ್ಲೀಭನದ
ಲೀಲೆಯಿಂದುಗುವ ಪಾಟಲವದೆನಿಕುಂ.

ಬೀಸುವೀ ಬಿರುಗಾಳಿ ಎನ್ನಂಗಳದ ಲತೆಯ
ನೋಸರಿಸದೊಪ್ಪಿರುವ ಕುಸುಮಕುಲವ
ಸೋಕಿ ಸೊರಗಿಸಿತು. ಎಚ್ಚರಿಪೆನದುಕತದಿ, 'ತನ
ಹಾಸದೆಸಕವನಾದು ನಲಿಯಬೇಡ!'

ಎನಿತೊ ಸುಗ್ಗಿಯು ಸೊಗದಿ ನಲಿವ ಹೂಗಳ ಕಂಡು
'ಮಿನುಗುವಿರ? ಮುನ್ನುಂಟು ಮುಗಿವು ನಿಮಗೆ.'
ಇನಿತೊಂದು ಪಲ್ಲವಿಯನಾ ವಸಂತಾಗಮುದೊ
ಳಾನಿಸುತ ನಾಣ್ಚಿಸಿದೆ ನನೆಗಳನಿತಂ.

ಇಂದಿನೀ ನಿಶಿಯ ನೀರವದಲ್ಲಿ ನಿಮಗದಾ
ನೊಂದು ಸಂಗೀತಸಲ್ಲಾಪವೀವೆಂ,
'ಸುಂದರಾಕೃತಿಯೊಡನೆ ಸೌಮ್ಯತೆಯು ನಿಚ್ಚಲುಂ
ಒಂದಿಸಿರ! ನಿಮಗಳಿವು ಬಾರದಿಹುದು.

'ವನದೆಲರು ಪರಿಮಳವ ಸೂರೆಗೈಯಲೆ ಅಲರೊ
ಳನುಕಂಪಕಣವನಿನಿಸುಂ ತಳಿಯದೆ?
ತನಿಹನಿಯಿನೊಗೆತಂದ ಪುಲಕದಿಂದೆಳ್ಚಿಸು
ತ್ತನುಗೊಳಿಸಿರಾ ಸಮೀರನ ಕೂರ್ಮೆಯುಂ.'

ಇದಕೊ ನವಾನಿಲ ಸಂಚಲಿಸಲಿ ಮೃದು
ಪದಗತಿಯಿಂ ತಳಿರಿಸೆ ಲತೆಯುಂ,
ಕುದುರಿಸೆ ಕೋಮಲಕಿಸಲಯದಿಂ ಮುಗು
ಳದೆಯಲಿ ಸೌಗಂಧದ ವ್ಯಥೆಯುಂ!

---

## ಅರಸಿ ಎಂತಿಹಳೊ!

ಅರಸಿ ಎಂತಿಹಳೊ ವಂಚಿಸುತವಳನೈತಂದೆ
  ದೆಸೆದೆಸೆಯ ನೋಡುತಿಹಳೆ!
ಅರಸುವಳೆ ಗಿರಿತೊರೆಯ ಮರಮಟ್ಟುಗಳಬಳಿಯು
  ಕರೆಕರೆದು ಮರುಗುತಿಹಳೆ!

ಮೂಡಬಾನ್ ಕೆಂಗುಡಿಯ ತಳೆದಿಹುದು, ನೇಸರನು
ಮೂಡುತಿಹನಲರುಗಳು ಬಿರಿಯುತಿಹವಿದೊ ದುಂಬಿ
ಹಾಡುತಿವೆ, ನುಣ್ಚರವ ಮಾಡುತಿವೆ ಹಕ್ಕಿಗಳು,
ಕಾಡಿನೊಳಗಾ ಪಳುಕುಗೋಡತುದಿಯಲಿ ಆಕೆ
  ಅರಸಿ ಇನ್ನೆಂತು ಇಹಳೊ! ೧

ಕಂಬನಿಯು ಹೊಳೆಹರಿಸಿ ನಡೆನಡೆದು ಬಸವಳಿದು
ಕಂಬುಕಂಧರೆ ಆವ ಮರದ ನೆರಳೊಳು ಕುಳಿತು
ತುಂಬಿದತಿದುಗುಡದಿಂ ಹಂಬಲಿಸುತಿಹಳೆನ್ನ
ಮುಂಬರಿಯಲಾರದೆಯೆ ಲಂಬಿಸುವ ಬಿಸಿಲಿನಲಿ
  ಅರಸಿ ಇನ್ನೆಂತು ಇಹಳೊ! ೨

ಆಕೆ ಕಳುಹಿದ ನುಡಿಯ ಗಾಳಿ ತಾರದೆ ಇಹುದೆ?
ಶೋಕದಾವರಣವಂ ದಾಂಟಲಾರದೆ ಇಹುದೆ?
ಜೋಕೆ ಎಂದಾಕೆಯನು ಹರಸುವವರಾರಲ್ಲಿ?
ಈ ಕರುಣೆಯಾಳ್ಕೆ ಎನ್ನೊಳಗಿಹುದನರಿವಲ್ಲಿ
  ಅರಸಿ ಇನ್ನೆಂತು ಇಹಳೊ! ೩

## ಹೂಗಳು

ಮಲ್ಲಿಗೆ ಮಾಲತಿ ಚೆಲುವೆಯರು
ಸೊಲ್ಲಿಸದಾ ಲತೆಗೊಲಿದಿಹರು.
ಸಲ್ಲಲಿತವು ಸುಮವಲ್ಲರಿ ಎಲ್ಲೆಡೆ
ಪಲ್ಲವಿಸಿನೆ; ವೈಶಾಖದವಾತದಿ
ದೂರದಿಂದ ಶೃಂಗಾರದ ವಾರ್ತೆಯು
ಸಾರಿಬಂದು ಹೃತ್ಕುಸುಮವನರಳಿಸಿ
ಉತ್ಸಾಹದ ರವ ಮಾಡುತಿದೆ!

ಅಲ್ಲದೊ ಸಂಪಿಗೆ ಅರಳಿಹುದು,
ಮಲ್ಲಿಗೆಮಲರೊಂದುರುಳಿಹುದು.
ಕಲರವದುದಯವು ಕಾಡಿನೊಳೆಲ್ಲೆಡೆ
ಮೊದುತಳಿರಲಿ ಚೈತನ್ಯವನೆಬ್ಬಿಸೆ
ದೂರದಿಂದ ಆನಂದದ ಕರೆಯದು
ಸಾರಿಬಂದು ಪ್ರತಿಭೆಯನಿರದರಳಿಸಿ
ಉತ್ಸಾಹದ ರವ ಮಾಡುತಿದೆ!

ಹೂಗಳ ರಾಣಿ ಗುಲಾಬಿ ಇದೊ,
ಬೀಗಿದ ಲಜ್ಜೆಯೊಳಡಗಿಹುದೊ!
ಫುಲ್ಲಪ್ರಸೂನಗಳೆಲ್ಲವು ಸಮನಿಸಿ
ಚೆಲ್ವಗುಲಾಬಿಗೆ ಪಟ್ಟವಗಟ್ಟರೆ
ದೂರದಿಂದ ತಂಗಾಳಿಯು ಮಂಗಳ
ವಾರಿಬಿಂದುಗಳ ತಳಿದೆದೆಯರಳಿಸಿ
ಉತ್ಸಾಹದ ರವ ಮಾಡುತಿದೆ!

## ರಸಿಕ

ಕಾರಿರುಳ ಕಾರ್ಮೋಡವೆಂಬ ಕುಂಜರವೇರಿ
ಸುರಚಾಪಚಾಪದೊಳಗೆ
ಕೂರಲಗುಕೋಲ್ಮಿಂಚ ಹೂಡಿ ಕತ್ತಲೆಯೊಡನೆ
ಕಾಳೆಗವ ಮಾಳ್ಪ ರಸಿಕಂ.

ಮಧುಮಾಸವೆಂಬ ಮಂದಾನಿಲನ ದೇಶದಲಿ
ಕೋಗಿಲೆಯನರಸು ಮಾಡಿ
ತಳಿರಿಡಿದ ಅಸುಗೆಪೊಂದೇರಿನೊಳು ಕುಳ್ಳಿರಿಸಿ
ಸೊಗಸಿನಿಂದೆಸೆವ ರಸಿಕಂ.

ತಾರೆಗಳ ಕಂಬನಿಯದೆಂಬ ಸುಮರಸ ರಸಿಕ
ನಳಿಯಾಗುತೀಂಟುತಿರುವಂ
ಭೋರೆನುವ ಸಾಗರದ ಅಲೆಯ ಕೋಲಾಹಲವ
ನಿಂಪಿನಾಲಾಪ ಮಾಳ್ಪಂ.

ಶೃಂಗಾರವಲ್ಲರಿಯ ತನ್ನ ರಸದಿಂ ಬರೆದು
ಅಡಿಗಡಿಗೆ ಸಗ್ಗುತ ನೋಡಿ
ಶೃಂಗಾರಸಾರದಲಿ ಮೈಮರೆದು ಧರೆಯೆಲ್ಲ
ನಸುನಗುವೊಲಾಡುತಿಹನು.

ಬಿರಿವಲರ ಸವಿಗಂಪನಾವಗಂ ಸೇವಿಸುವ
ಮರಿದುಂಬಿಯಂತೆ ರಸಿಕಂ
ತಿರೆಯ ವಸ್ತುಗಳ ಗುಣಪೀಯೂಷವನ್ನೀಂಟ
ಲನಿಶವಾತುರಿಸುತಿರುವಂ!

---

## ನಮ್ಮೂರು

ಈ ದಾರಿಯಲಿ ನಡೆಯೆ ಮೂರುಗಾವುದ ದೂರ
ತೋರುವುದು ಗಿರಿಯೊಂದು, ಅದರ ಕೆಲದಿ
ಮೇದಿನಿಯ ಮೊಲೆವಾಲತೆರದ ತಿಳಿನೀರಹೊಳೆ
ಸಾರಿಹರಿವುದು ಸರಸಗಾನ ಮಾಡಿ.

ಹೊಳೆತಡಿಯೊಳಲ್ಲಲ್ಲಿ ಹೂದೋಟ ಹರಡಿಹವು,
ತೋಟದೊಳಗೊಂದು ಕಾಲ್ದಾರಿಯಿಹುದು;
ತಳಿರಿಡಿದ ಹೂವಳ್ಳಿ ಇರ್ಕೆಲದಿ ಬೆಳೆದಿಹವು,
ನೀಟವಾದಾ ಹಾದಿ ಸುಗಮವಿಹುದು.

ಮುಂದೆಮುಂದಕೆ ಸರಿಯೆ ಹೊಳಲೊಂದು ತೋರುವುದು,
ಪೊಳಲೊಳೆಲ್ಲೆಲ್ಲಿಯುಂ ಶಾಂತಿ ಇಹುದು.
ಸುಂದರಧ್ರುವತಾರೆ ಸಪ್ತಋಷಿಮಂಡಲದಿ
ಬೆಳಗುವೊಲು ನಾಡನಡುವಣ ದೇಗುಲಂ!

ದೇಗುಲದ ಮುಂದೊಂದು ತಿಳಿನೀರಕೊಳವಿಹುದು
ಕೊಳತಡಿಯೊಳರಳಿಸೊಪಿಕಟ್ಟೆ ಇಹುದು;
ಆಗಸದಿ ತಾರೆಗಳು ಅಡಿ ಇಡಲು ಊರಜನ
ಬಳಸಿಬರುವಾ ನೋಟ ರಮ್ಯವಿಹುದು.

ಸಂಜೆಯಲಿ ದೇಗುಲದಿ ನಿಕ್ವಣಿಪ ವೀಣೆಯಲಿ
ಮಂದಿಮನೆಗಳ ತೊರೆದು ನೆರೆವರಲ್ಲಿ;
ಮಂಜೀರಹಾರಕೇಯೂರತಿಂಥಿಣಿರವದಿ
ಸುಂದರಿಯರೊಂದಾಗಿ ಬೆರೆವರಲ್ಲಿ.

ತಂಗಾಳಿ ನಮ್ಮೂರ ಹೂದೋಟದಿಂದೊಯ್ವ
ಪರಿಮಳನ ಸೇವಿಸುತ ನೆರೆಯ ಜನತೆ
ಸಿಂಗರದ ಸರಸತೆಯಿನೊಲಿದು ಹೆಸರಿಸಿ ಕುಸುಮ
ಪುರವೆಂದು ನಮ್ಮೂರ ಮನ್ನಿಸಿಹುದು.

ನಮ್ಮೂರಿನೊಳು ಕಳವುಮರೆವೋಸಗಳ ತಿಳಿವು
ತಳಿರಿಸುವ ಲತೆಗಿನಿಸು ಇಂಬು ಸಿಗದು;
ಒಮ್ಮೆ ನೋಡಲು ಜನವು ಹೊಳಲಸಜ್ಜನ ಸೊಗವ
ನುಳಿಯಲಾರದು ದುಗುಡ ಕುಡಿತೋರದೆ.

ನಮ್ಮೂರಾನಂದದ ತವರೂರು,
ನಿಚ್ಚಲು ನೆಮ್ಮದಿ ನೆಲಸಿಹ ಊರು.
ಸಮ್ಮೋದವನೊದವಿಪ ಸಿರಿಯೂರು,
ಸ್ವಚ್ಛಸಲಿಲಕಾಸಾರದ ಊರು.

## ಬೇಡಿಕೆ

ಬೇಡುವೆ ನಾನಿನಿತಂ ಏಹರಿ
ನೀಡು ದಯವತೋರಿ ||

ಕಾನನದಲಿ ಕುಟ್ಮಲವೊಂದರಳುತ
ಲೀನವಾಗಿ ಅಜ್ಞಾತದಿ ಪರಿಮಳ
ಸೂಸುತಲಿರುವೊಲು ಹೆರವರ ಸೇವೆಯು
ಆಶಿಸಿ ಗೈಯುತ ಅರಿಯದೊಲಿರುವುದ. ||

ಕೊಳದೊಳು ಕೆಸರಿಲಿ ಜನಿಸಿದ ತಾವರೆ
ಕೊಳೆ ತಳೆಯದೆ ಅತಿಶುಭ್ರವಾಗಿರುವೊಲು
ಇಳೆಯೊಳು ಕನಡುಗಳೆಡೆಯೊಳು ಬಳೆದೊಡ
ನಳಿನನಾಭ! ನಿರ್ಮಲದಿಂದಿರುವುದ. ||

ತಿಳಿಬಾನಿಲಿ ಹಾರಾಡುತೆ ಉಣಿಸನೆ
ಗಳಿಸಿದ ಪಕ್ಷಿಯು ಅದ ಸವಿಯಲು ಬಗೆ
ಎಳಸುತ ಗೂಡಿನೊಳಿರುತಿಹ ಮರಿಗಳಿ
ಗೊಲಿದೀಯುತ ಸಂತಸವನು ಪಡೆವೊಲು,

ಬಡತನದಾಳದಿ ಮುಳುಗಿದನಾಥರ
ಬಿಡದನವರತವು ಸೇವಿಸುತಲಿ ಅವ
ರೊಡಲ ಹಸಿವೆಯನು ನೀಗಿಸುವೊಲು ಮನ
ವಡೆದುಮವರ ಸೊಗಕಾಂಬುವ ಕಣ್ಗಳ. ||

## ತನು



ಎನ್ನಯ ತನುವಿದು ಕೊಳಲಹುದೆ ಹರಿ
ನಿನ್ನ ಕೈಯ ಸ್ಪರ್ಶವು ಬಹುದೆ?

ಸರಳಮುರಳಿಸಂಗೀತಸಮೀರದಿ
ದುರಿತನೀರದವ ಚೆದರಿಸುತೆನ್ನೆದೆ
ಸರಸಿಜಮಧ್ವದ ಭಕ್ತಿಸೌರಭವ
ತ್ವರಿತದಿ ನೀ ಸ್ವೀಕರಿಸೆಲೊ ತಂದೆ!

ಭೋಗಕೇಂದ್ರವೆನ್ನೀ ತನುಗೊಳಲಿದ
ರಾಗದೇಳ್ಗೆಯೂ ಮೃದುಲರವದ ವೈ
ರಾಗರೇಣುವಿಲಿ ನಿಲಿಸುತ ನಲಿಸೈ
ತ್ಯಾಗಪುಲಕವನು ಅರಳಿಸು ತಂದೆ!

ಕೊಳಲಿನ ಸುಮಧುರಗಾನಲಹರಿಯಲಿ
ಫಲಿತಭೋಗವೈರಾಗವು ಜನದಲಿ
ನಿಲುಕಲಿ, ನೆಲೆಸಲಿ ಪಾದಪದೊಲು ಹರಿ
ಒಲಿದು ಬಾಜಿಸೀ ಕೊಳಲನು ತಂದೆ!

ಕಣ್ಣಿಗಗೋಚರ ಕೊಳಲಗಾನದೊಲು
ಮನ್ಮನದಲಿ ತವ ನಾದಬಿಂದು ಸಲೆ
ಯುಣ್ಮ್ಮತ ತಳಿರಿಸೆ ವಿಶ್ವಪ್ರೇಮವನು—
ಸನ್ಮಾನಿತಸುಮಸುರಭಿಯದಾಗಲಿ!

## ಸೇವೆ

ಸೇವೆಯನು ಮಾಳ್ಪೆ ಹರಿಯೆ—ತವಚರಣ
ಸೇವೆಯನು ಮಾಳ್ಪೆ ಹರಿಯೆ ।

ಸೇವೆ ಸನ್ಮೋಕ್ಷಸೋಪಾನವೆಂಬುದ ದಾಸ
ಭಾವಿಕರು ಎಡೆವಿಡದೆ ಸಾರುತಿಹರು;
ಪಾವನಮನೋರಾಗದೇಳ್ತೆರದಿನ್ನೈತಂದ
ಸೇವೆಯಲಿ ತನುವಿದರ ಸವೆಸಲಿಹೆನು ॥

ಸೇವೆಯಲಿ ಸಂಸಾರಬಂಧ ವಿಗಲಿತವಹುದು,
ಭಾವಭುವಿಯಲಿ ಬೆಳಕು ಹರಿಯಲಿಹುದು;
ಪಾವಕನೊಳುರಿದಳಿವ ಇಂದಣದ ತೆರದಿಂದ
ಸೇವೆಯಲಿ ನಶಿಸುವುದು ಪಾಪಪುಂಜ ॥

ಅರಳಿದಲರೊಂದು ಸೌರಭದ ಸರಿಸೂಸುತಿರ
ಲರಿವುದೆಂತದರ ಮಾನವ ಸೇವೆಯಂ?
ಅರಿಯದೊಂದುತ್ಸಾಹವೆತ್ತ ನೇಹದ ಮಾಳ್ಕೆ,
ಹರಿ, ನಿನ್ನಯನಿಶಸೇವೆಯದಾಗಲಿ!

# ಮಾಯೆ

'ಮಾಯೆ' 'ಮಾಯೆ' ಎಂದು ತಳುವದೆ ನುಡಿವರು,
ಕಾಯಕ್ಲೇಶವನು ಮುಳಿಯುತ ಹಳಿವರು,
ಹೇಯಕರ್ಮಗಳ ತುಳಿಯದೆ ನಡೆವರು,
ಮಾಯೆ ಇದಾವುದಹೊ?

ಗಾಳಿಯೊಳುಲಿಯುವ ಸಂತಸ ಸವಿಯರು,
ಸಾಲುತಾರೆಗಳ ತತ್ವನ ತಿಳಿಯರು,
ಕೋಲುಮಿಂಚು ಹರಿನಗೆಯೆಂಬುದರಿಯರು,
ಮಾಯೆ ಇದಾವುದಹೊ?

ಜನರೊಳು ಹೊಳೆಯುವ ಜೀವನ ನೋಡರು,
ನನೆಯಾದ ತನುವಿದು ಮುಗಿವುದ ಕಾಣರು,
ಘನತೆಯು ಗಿರಿಯಿಂದ ಬೀಳ್ವುದ ಬಗೆಯರು,
ಮಾಯೆ ಇದಾವುದಹೊ?

'ನಾನು, ನನ್ನದಿವು,' ಎಂಬುದೆ ಮಾಯೆಯು,
'ನೀನು, ನಿನ್ನದಿವು,' ಎಂಬುದೆ ಸತ್ಯವು,
ಮಾನಿತಭಕ್ತರ ತತ್ವವಿದರಿಯರು,
ಮಾಯೆ ಇದಾವುದಹೊ?

# ಎಲ್ಲವು ನಿನ್ನದು

ನಾನು ನಿನ್ನವನಯ್ಯಾ—ಎ ಹರಿ
ನಾನು ನಿನ್ನವನಯ್ಯಾ ॥
ಎನ್ನದೆಂಬುದಿನ್ನೇನೇಸಿಲ್ಲವು
ಎನ್ನದು, ಅವನದು ಎಲ್ಲವು ನಿನ್ನವು ॥

'ಮಮ'ತೆ ಎಂಬ ಹೂವಳ್ಳಿಯೊಳರಳಿದ
ಪುತ್ರಮಿತ್ರಕಲತ್ರನೆಂಬ ಹೂ
ಪ್ರೇಮಕಂಪನೆಡೆಬಿಡದೆ ಸೂಸಲದ
ಕಾಮಿಸಿ ಸೋಲುತ ಅವುಗಳನುಳಿದೆನು ॥

ತನ್ನವನೆನ್ನುತ ಎಂತುಪುರುವ ಪಿತ
ತನ್ನ ಪುತ್ರ ಮಿತ್ರುಗೆ ತುತ್ತಾಗಿರೆ?
ಬನ್ನಗಳವು ಪಲ್ಲವಗಳ ಪುಷ್ಪದ
ಬೆಂಬಿಡದಂತೆಯೆ ಎನ್ನ ಮುಸುಕಿರೆ ॥

ಎನ್ನದು ಎಂಬುದು ದಾಸ್ಯಶೃಂಖಲೆಯು
ನಿನ್ನೊಳು ಎಲ್ಲವನೊಪ್ಪಿಸಿ ನೋಡುವೆ
ಹೊನ್ನುಮಣ್ಣುಹೆಣ್ಣೆಲ್ಲವುಗಳಲಿ
ಸನ್ನುತ ನಿನ್ನಾನಂದದ ರೂಪನ ॥

## ಪುಷ್ಪಾಂಜಲಿ

ಅರಳಿದ ಹೂಗಳು, ಅರಳದವುಗಳು,
ಅರೆಬಿರಿದವು, ಬಲುಬಾಡಿಬಗ್ಗಿಹವು

ತಳಿರೆಳೆಬೆರಳೊಳು ಕೊಯ್ದು ಕೋದಿಹೆನು
ತಳಿರಡಿ ನಿನ್ನವು ಅವಕೊಪ್ಪಿಸಿಹೆಂ ॥

ಮೆಲ್ಲೆಲರೊಂದದು ಪರಿಮಳವಿದರಿಂ
ತಲ್ಲಣಿಸದೆ ನಿನ್ನೆಡೆಗೊಯ್ಯುತಿದೆ
ಸಲ್ಲಲಿತವು ಎಂದಾದೊಡೆ ಕೈಕೊಳು
ಇಲ್ಲವಾದೊಡವನಡಿಗಳೊಳಿರಿಸೈ!

ಎಲ್ಲಿಯೊ ಕಾಡೊಳು ಅರಳಿದುವಲ್ಲವು
ಮಲ್ಲಳಿನುಣ್ಡುಟಗೊಪ್ಪಿದುವಲ್ಲವು,
ಎನ್ನಯ ಮನೆಯಂಗಳದಾ ಲತೆಯವು
ನಿನ್ನ ಪೂಜೆಗೋಸುಗ ಅರಿಸಿದವು.

ನಿನ್ನಯ ದಯೆ ಎನ್ನೊಳಗಿರುತಿರೆ ಹರಿ
ಅನ್ಯರ ತೋಟದ ಹೂ ಎನಗೇಕೆ?

ಇವುಗಳನಿತ್ತಿಹ ಲತೆಗೆರಚಿದ ಜಲ
ಅವಿರತಧಾರೆಯದಾಗದಿರ್ದೊಡೇಂ?
ಎರಚಿದ ಹನಿಯೊಂದೆರಡವು ನಿರ್ಮಲ
ಸರಸಿಯ ಸಲಿಲದಿ ತಂದವು ನೋಡೈ!

---

